ಡಾ॥ ಎಸ್.ಎಸ್. ರಂಗರಾಜು *

# ಬಿಳಿಕೆರೆಯ ಹತ್ತಿರ ಬೃಹತ್ ಶಿಲಾಯುಗದ ಸಂಸ್ಕೃತಿ ಪತ್ತೆ

ಬಿಳಿಕೆರೆಯಲ್ಲಿ ಇರುವ ಬೈಪಾಸ್ ರಸ್ತೆಯಿಂದ ೫ ಕಿ.ಮೀ. ದೂರದಲ್ಲಿ ಆಯರಹಳ್ಳಿ ಎಂಬ ಒಂದು ಸಣ್ಣ ಗ್ರಾಮವಿದೆ. ಗ್ರಾಮದ ಹೊರವಲಯದಲ್ಲಿ ನೂರಕ್ಕೂ ಹೆಚ್ಚು ಬೃಹತ್ ಶಿಲಾಯುಗದ ಸಮಾಧಿಗಳು ಕಂಡು ಬರುತ್ತವೆ. ಆಯರಹಳ್ಳಿಯು ಮೈಸೂರಿನಿಂದ ಸರಿಯಾಗಿ ೨೮ ಕಿ.ಮೀ.ಗಳ ದೂರದಲ್ಲಿದೆ. ಇಲ್ಲಿಯವರೆಗೂ ಪತ್ತೆ ಯಾಗಿರುವ ಶಿಲಾಯುಗ ನೆಲೆಗಳಲೆಲ್ಲ ಇದು ಮೈಸೂರು ನಗರಕ್ಕೆ ಅತ್ಯಂತ ಸಮೀಪವಾಗಿರುವುದೆಂದು ಹೇಳಬಹುದು.

ಇಲ್ಲಿ ಇರುವ ನೂರಕ್ಕೂ ಹೆಚ್ಚು ಸಮಾಧಿಗಳಲ್ಲಿ ಗುಂಡಿಯ ಸುತ್ತ ವೃತ್ತಾಕಾರವಾಗಿ ಕಲ್ಲುಗಳನ್ನು ಜೋಡಿಸಿರುವ ಸಮಾಧಿಗಳೇ ಹೆಚ್ಚು (Pit-circles). ಹೆಚ್ಚಿನ ಸಂಖ್ಯೆಯಲ್ಲಿರುವ ಇವು ಅನೇಕ ಅಳತೆಗಳ ವೃತ್ತಗಳನ್ನು ಹೊಂದಿವೆ. ಇವುಗಳನ್ನು ಬಿಟ್ಟರೆ ಕೇರ್‌ನ್ ವೃತ್ತಗಳು ಸಹ ಹೆಚ್ಚಿನ ಸಂಖ್ಯೆಯಲ್ಲಿವೆ. ಇವುಗಳಲ್ಲಿ ಎರಡು ವಿಧಾನವಿದೆ. ಒಂದು ಸಮಾಧಿಯ ಮೇಲೆ ಮಧ್ಯೆ ಗಾತ್ರದ ಬೆಣಚು ಕಲ್ಲುಗಳನ್ನು ಹಾಕಿ ಅದನ್ನು ವೃತ್ತಾಕಾರವಾಗಿ ಮಾತ್ರ ಹರಡಿರುವುದು ಒಂದು ವಿಧಾನವಾದರೆ ಮತ್ತೊಂದು ವಿಧಾನದಲ್ಲಿ ಹೀಗೆ ಹರಡಿದ ಬೆಣಚು ಕಲ್ಲುಗಳ ಸುತ್ತಲೂ ದಪ್ಪನಾದ ಉಂಡೆಗಲ್ಲುಗಳನ್ನು ವೃತ್ತಾಕಾರವಾಗಿ ಜೋಡಿಸಿರುವುದು. ಇವುಗಳಲ್ಲದೆ ಸಂಪೂರ್ಣವಾಗಿ ನಾಶವಾಗಿರುವ ಕೆಲವು (Cist) ಸಿಸ್ಟ್ ಸಮಾಧಿಗಳು ಕಂಡುಬರುತ್ತವೆ.

ಮತ್ತೊಂದು ಪ್ರಮುಖ ಅಂಶವೆಂದರೆ ಕೆಲವು ಸಮಾಧಿಗಳ ಸುತ್ತಲೂ ಜೋಡಿಸಿರುವ ಉಂಡೆಗಲ್ಲುಗಳನ್ನು ಸೇರಿಸಿಕೊಂಡು ಮತ್ತೊಂದು ವೃತ್ತವನ್ನೂ, ಹಾಗೆ, ಅವರೆಡಕ್ಕೂ ಹೊಂದಿಕೊಂಡಿರುವಂತೆ ಉಂಡೆಗಲ್ಲುಗಳನ್ನು ಸೇರಿಸಿಕೊಂಡು ಪಕ್ಕದಲ್ಲೇ ಇನ್ನೂ ಒಂದು ವೃತ್ತವನ್ನು ರಚಿಸಿರುವುದನ್ನು ಕಾಣಬಹುದು. ಇದರಲ್ಲಿ ಗಮನಿಸಬೇಕಾದ ಅಂಶವೆಂದರೆ ಮುಖ್ಯ ವೃತ್ತವು ದೊಡ್ಡದಾಗಿದ್ದು ಅದಕ್ಕೆ ಹೊಂದಿಕೊಂಡಿರುವ ಉಳಿದ ವೃತ್ತಗಳು ಚಿಕ್ಕದಾಗಿರುವುದನ್ನು ನೋಡಿದರೆ ಬಹುಶಃ ರಕ್ತಸಂಬಂಧಿಗಳನ್ನು ಹೀಗೆ ಸಮಾಧಿ ಮಾಡಿರಬಹುದು. ಉತ್ಖನನವನ್ನು ಮಾಡಿ ಸಿಗುವ ಮೂಳೆಗಳನ್ನು ವೈಜ್ಞಾನಿಕ ರೀತಿಗಳಲ್ಲಿ ಅಧ್ಯಯನ ಮಾಡಿದರೆ ಇದಕ್ಕೆ ಉತ್ತರ ಸಿಗಬಹುದು.

ಆಯರಹಳ್ಳಿಯ ಹೊರ ಭಾಗದಲ್ಲಿ ಅಂದರೆ ಹೊಲ, ಗದ್ದೆಗಳಲ್ಲಿ ಕೆಲವು ಕಡೆ ಬೃಹತ್ ಶಿಲಾಯುಗದ ಮಡಿಕೆಯ ಚೂರುಗಳು ಕಂಡು ಬರುತ್ತವೆ. ಕೆಂಪು, ಕಪ್ಪು ಹಾಗೂ ಕೆಂಪು ಮತ್ತು ಕಪ್ಪು ಬಣ್ಣಗಳ ಮಿಶ್ರಿತ ಮಡಿಕೆ ಚೂರುಗಳು ಕಂಡು ಬರುತ್ತದೆ. ಆದರೆ ಯಾವುದೇ ಕಬ್ಬಿಣದ ಆಯುಧಗಳು ಸಂಶೋಧನೆಯಲ್ಲಿ ಕಂಡು ಬರಲಿಲ್ಲ. ಇನ್ನೊಂದು ಮುಖ್ಯ ಅಂಶವೆಂದರೆ ಕಬ್ಬಿಣವನ್ನು ಅದಿರಿನಿಂದ ಬೇರ್ಪಡಿಸಿದ ಮೇಲೆ ಉಳಿಯುವ ಕಿಟ್ಟ ಅಲ್ಲಲ್ಲಿ ಕಂಡುಬರುವುದರಿಂದ ಕಬ್ಬಿಣವನ್ನು ಬೇರ್ಪಡಿಸುವ ಕಾಯಕ ಇಲ್ಲೇ ನಡೆದಿರಬಹುದು. ಇದರ ಬಗ್ಗೆ ಹೆಚ್ಚಿನ ಮಾಹಿತಿ ಸಂಗ್ರಹಿಸಬೇಕಾದರೆ ಇಲ್ಲಿ ಉತ್ಖನನ ನಡೆಯಬೇಕಾಗಿದೆ. ಹಾಗೇನಾದರೂ ಇಲ್ಲಿ ಕಬ್ಬಿಣವನ್ನು ಬೇರ್ಪಡಿಸುವ ಕಾರ್ಯ ನಡೆದಿದ್ದರೆ ಬೃಹತ್ ಶಿಲಾಯುಗದ ಜನರ ಸಾಂಸ್ಕೃತಿಕ ಜೀವನದ ಬಗ್ಗೆ ಆಯರಹಳ್ಳಿಯ ನೆಲೆಗಳು ಹೆಚ್ಚಿನ ಮಾಹಿತಿ ನೀಡುವುದರಲ್ಲಿ ತುಂಬಾ ಸಹಾಯಕ ವಾಗುತ್ತವೆ.

* ಸಂಶೋಧನಾ ಸಹಾಯಕ, ಪ್ರಾಚೀನ ಇತಿಹಾಸ ಮತ್ತುಪುರಾತತ್ವ ಇಲಾಖೆ, ಮಾನಸ ಗಂಗೋತ್ರಿ, ಮೈಸೂರು-೫೭೦೦೦೬



ಬೃಹತ್ ಶಿಲಾಯುಗದ ಸಮಾಧಿ ಆಯರಹಳ್ಳಿ

ನಮ್ಮ ದುರಾದೃಷ್ಟಕ್ಕೆ ಇಲ್ಲಿಯ ಹಳ್ಳಿ ಜನಗಳು ಈ ಜಾಗವನ್ನು ಆಕ್ರಮಿಸಿಕೊಂಡು ವೃತ್ತಗಳನ್ನು ಕೆಡವಿ ಬೇಸಾಯ ಕಾರ್ಯ ಮಾಡುತ್ತಿದ್ದಾರೆ. ಈ ಜನಗಳಿಗೆ ಇದರ ಮಹತ್ವವನ್ನು ತಿಳಿಸಿದರೂ ಏನು ಪ್ರಯೋಜನವಾಗುತ್ತಿಲ್ಲ. ಕೆಲವರು ವೃತ್ತಗಳನ್ನು ಹಾಗೆ ಉಳಿಸಿಕೊಂಡು ಬೇಸಾಯ ಮಾಡುತ್ತಿದ್ದರೆ ಮತ್ತೆ ಕೆಲವರು ವೃತ್ತಗಳನ್ನು ಕಿತ್ತು ಬದಿಗಿಟ್ಟು ಬೇಸಾಯ ಮಾಡುತ್ತಿರುವುದರಿಂದ ಮುಂದೆ ಉತ್ಖನನ ಮಾಡುವವರಿಗೆ ಬಹಳ ತೊಂದರೆಯಾಗುವುದರಲ್ಲಿ ಸಂದೇಹವೇ ಇಲ್ಲ. ಇರುವ ವೃತ್ತಗಳನ್ನು ಉಳಿಸಿಕೊಂಡು ಅಥವಾ ಇವು ಸಂಪೂರ್ಣವಾಗಿ ನಾಶವಾಗುವುದಕ್ಕಿಂತ ಮೊದಲು ಉತ್ಖನನ ನಡೆಯಬೇಕಾಗಿದೆ. ಈ ಉತ್ಖನನದಿಂದ ಮೈಸೂರು ಜಿಲ್ಲೆಯಲ್ಲಿರುವ ಬೃಹತ್ ಶಿಲಾ ಯುಗದ ಸಮಾಧಿಗಳ ಮೇಲೆ ಉತ್ತಮ ಮಾಹಿತಿ ದೊರೆಯುತ್ತದೆ. ಅಷ್ಟೆ ಅಲ್ಲ ಈ ಜಿಲ್ಲೆಯಲ್ಲಿ ಇತರ ಕಡೆಗಳಲ್ಲಿ ನಡೆದಿರುವ ಉತ್ಖನನದ ಅವಶೇಷಗಳೊಂದಿಗೆ ಹೋಲಿಸಿ ನೋಡಿ ಒಂದು ಒಳ್ಳೆಯ ಫಲಿತಾಂಶವನ್ನು ಪಡೆದುಕೊಳ್ಳಬಹುದು. ದೊರೆಯುವ ಅವಶೇಷಗಳನ್ನು ಬಾಬ ಅಟೋಮಿಕ್ ರಿಸರ್ಚ್ ಸೆಂಟರ್‌ನವರ ಸಹಾಯದಿಂದ ಕಾಲ ನಿರ್ಣಯ ಮಾಡಿಸಿ ಬೃಹತ್ ಶಿಲಾಯುಗದ ಬಗ್ಗೆ ಉತ್ತಮ ಮಾಹಿತಿ ಒದಗಿಸಿಕೊಳ್ಳಬಹುದು. ಈ ರೀತಿಯ ವೈಜ್ಞಾನಿಕ ಹಾಗೂ ತಾಂತ್ರಿಕತೆಯ ಬಳಕೆಯಿಂದ ಪ್ರಾಚೀನ ನೆಲೆಗಳ ನಿಖರವಾದ ಅಧ್ಯಯನ ನಡೆಯಬೇಕಿದೆ. ಹೀಗೆ ಸಂಶೋಧನೆ ನಡೆಸಿದರೆ ಉತ್ತಮ ಮಾಹಿತಿ ದೊರೆಯುತ್ತದೆ. ಈ ನೆಲ ಹಾಳಾಗಿ ಹೋಗುವುದಕ್ಕೆ ಮೊದಲು ಈ ಕಾರ್ಯ ನಡೆಯಬೇಕಿದೆ. ○